ಪ್ರಸ್ತಾವನೆಗೆ ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ : PWD 539 FC-1/12, ದಿನಾಂಕ : 04–09–2012ರಲ್ಲಿ ಕೆಳಕಂಡಂತೆ ಅಭಿಪ್ರಾಯಿಸಿರುತ್ತದೆ :

Finance Department advises Administrative Department to call short term tender. Technical qualification criteria can be suitably designed to ensure competent contractors. This work being more than Rs. 5.00 crores, Cabinet approval should also be taken.

ಸದರಿ ಸೇತುವೆಯು ರಾಷ್ಟ್ರೀಯ ಹೆದ್ದಾರಿ–218ರಲ್ಲಿ ಇದ್ದು ಪ್ರಮುಖ ರಸ್ತೆಯಾಗಿದ್ದು, ಅಕ್ಕ–ಪಕ್ಕದ 2 ರಾಜ್ಯಗಳಾದ ಮಹಾರಾಷ್ಟ್ರ, ಆಂಧ್ರ ಪ್ರದೇಶಕ್ಕೆ ಸಂಪರ್ಕಿಸುವ ಅಂತರರಾಜ್ಯ ರಸ್ತೆಯಾಗಿದ್ದು, ಈ ರಸ್ತೆಯಲ್ಲಿರುವ ಸೇತುವೆಯ ತುರ್ತು ದುರಸ್ಥಿಗಾಗಿ ಸಾರ್ವಜನಿಕರ, ಜನಪ್ರತಿನಿಧಿಗಳ ಹಾಗೂ ಕೇಂದ್ರ ಸಚಿವರ ಒತ್ತಡ ಇರುವುದರಿಂದ ಹಾಗೂ ಅನೇಕ ದಿನ ಪತ್ರಿಕೆಗಳಲ್ಲಿ ಈ ಸೇತುವೆ ದುರಸ್ತಿಗಾಗಿ ಒತ್ತಾಯಿಸಿರುವ ವರದಿಗಳು ಪ್ರಕಟಗೊಂಡಿರುವ ಹಿನ್ನೆಲೆಯಲ್ಲಿ ಈ ಕಾಮಗಾರಿಯನ್ನು ತುರ್ತಾಗಿ ನಿರ್ವಹಿಸಬೇಕಾಗಿದ್ದು, ಕಾಮಗಾರಿ ಗುಣ ನಿಯಂತ್ರಣ ಪಡೆಯ ಸದಸ್ಯರುಗಳು ಶಿಫಾರಸ್ಸು ಮಾಡಿರುವಂತೆ ತಾಂತ್ರಿಕ ನೈಪುಣ್ಯತೆ ಹೊಂದಿರುವ M/s Repcon Consultancy & Services ಹೈದರಾಬಾದ್, ಇವರ ಮುಖಾಂತರ ನೇರವಾಗಿ ರೂ. 638.00 ಲಕ್ಷಗಳ ಮೊತ್ತದಂತೆ ದುರಸ್ತಿಗೊಳಿಸಲು ಕರ್ನಾಟಕ ಪಾರದರ್ಶಕತೆಯ ಅಧಿನಿಯಮ 4(g) ಅಥವಾ 4(a) ಅಡಿಯಲ್ಲಿ ವಿನಾಯಿತಿ ನೀಡಲು ಪುನಃ ಆರ್ಥಿಕ ಇಲಾಖೆಗೆ ಪ್ರಸ್ತಾವನೆ ಕಳುಹಿಸಲಾಯಿತು.

ಪುನಃ ಕಳುಹಿಸಲಾದ ಪ್ರಸ್ತಾವನೆಗೆ ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ : PWD 569 FC-1/12, ದಿನಾಂಕ :14–9–2012 ರಲ್ಲಿ ಕೆಳಕಂಡಂತೆ ಅಭಿಪ್ರಾಯಸಿರುತ್ತದೆ :

" 1) If the Administrative Department believes that this Company is the single source for this Technology, it needs to act as per 4(b) of KTPP Act.

2) If it is not the case, procurement through tendering is the best option as it is not delay in procurement but delay in execution that is the more critical element. Short-circuiting tendering will not guarantee faster execution. PWD may call short term tender".

ಈ ಕಾಮಗಾರಿಯು ಸೇತುವೆಯನ್ನು ಪುನಶ್ಚೇತನಗೊಳಿಸುವ ಕೆಲಸವಾಗಿರುವುದರಿಂದ ಹಾಗೂ ಅಂತರ ರಾಜ್ಯಗಳ ಸಂಪರ್ಕವನ್ನು ಈ ಸೇತುವೆ ನಿರ್ಮಾಣದಿಂದ ಪುನರ್ ಸ್ಥಾಪಿಸುವಲ್ಲಿ ಕಾಮಗಾರಿಯನ್ನು ತುರ್ತಾಗಿ ನಿರ್ವಹಿಸಬೇಕಾಗಿರುವ ಹಿನ್ನೆಲೆಯಲ್ಲಿ ಕಾಮಗಾರಿ ಗುಣ ನಿಯಂತ್ರಣ ಕಾರ್ಯಪಡೆಯ ಸದಸ್ಯರುಗಳು ಶಿಫಾರಸ್ಸು ಮಾಡಿರುವಂತೆ ಕರ್ನಾಟಕ ಪಾರದರ್ಶಕತೆಯ ಅಧಿನಿಯಮ 4(g) ಅಡಿಯಲ್ಲಿ ನೇರವಾಗಿ M/s Repcon Consultancy & Services, ಹೈದರಾಬಾದ್, ಇವರಿಗೆ ಕೆಲಸವನ್ನು ವಹಿಸಿಕೊಡುವುದು ಸೂಕ್ತವೆಂದು ಭಾವಿಸಿ ಮಾನ್ಯ ಲೋಕೋಪಯೋಗಿ ಸಚಿವರ ಅಧ್ಯಕ್ಷತೆಯಲ್ಲಿ ಕಾಮಗಾರಿ ಗುಣ ನಿಯಂತ್ರಣ ಕಾರ್ಯಪಡೆಯ ಸದಸ್ಯರು ಮತ್ತಿತರೆ ಇಲಾಖಾಧಿಕಾರಿಗಳೊಂದಿಗೆ ದಿನಾಂಕ : 19–7–2012ರ ಸಭೆಯಲ್ಲಿ ಚರ್ಚಿಸಿ ನಿರ್ಧರಿಸಿದಂತೆ ಹುಬ್ಬಳ್ಳಿ–ಹುಮನಾಬಾದ್ ರಾಷ್ಟ್ರೀಯ ಹೆದ್ದಾರಿ–218ರ ಕಿ.ಮೀ. 376.40 ರಲ್ಲಿ ಬೆಣ್ಣೆತೊರಾ ನದಿಗೆ ಅಡ್ಡಲಾಗಿ ಕುರಿಕೋಟಾ ಗ್ರಾಮ ಸಮೀಪದಲ್ಲಿರುವ ಹಾನಿಯಾಗಿರುವ ಸೇತುವೆಯನ್ನು ಪುನರುಜ್ಜೀವನಗೊಳಿಸಲು ಅನುವಾಗುವಂತೆ ಅನುಮೋದನೆಗಾಗಿ ಸಚಿವ ಸಂಪುಟದ ಮುಂದೆ ಮಂಡಿಸಲು ಮಾನ್ಯ ಸಚಿವರು ಸೂಚಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಗಳು 1977ರ ಮೊದಲನೇ ಷೆಡ್ಯೂಲ್‌ನ ಐಟಂ 15ರನ್ವಯ ಹಾಗೂ ನಿಯಮಗಳ ನಿಯಮ 17ರನ್ವಯ ಸಚಿವ ಸಂಪುಟದ ಅನುಮೋದನೆ ಹಾಗೂ ನಿರ್ದೇಶನದನುಸಾರ ಆರ್ಥಿಕ ಇಲಾಖೆಯು (ಸಂಗ್ರಹಣಾ ಕೋಶ) ಅಧಿಸೂಚನೆ ಸಂಖ್ಯೆ : ಆಇ 998 ವೆಚ್ಚ–12/12, ದಿನಾಂಕ : 09–11–2012ರಲ್ಲಿ ಪ್ರಸ್ತಾವಿತ ಕಾಮಗಾರಿಯನ್ನು ಕೈಗೊಳ್ಳುವಲ್ಲಿ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿರುತ್ತದೆ. ಅದರಂತೆ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಲೋಇ 34 ಸಿಬಿಆರ್ 2012, ಬೆಂಗಳೂರು, ದಿನಾಂಕ : 22–11–2012.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಹಿನ್ನೆಲೆಯಲ್ಲಿ ಹುಬ್ಬಳ್ಳಿ–ಹುಮನಾಬಾದ್ ರಾಷ್ಟ್ರೀಯ ಹೆದ್ದಾರಿ–218ರ ಕಿ.ಮೀ. 376.40 ರಲ್ಲಿ ಬೆಣ್ಣೆತೊರಾ ನದಿಗೆ ಅಡ್ಡಲಾಗಿ ಕುರಿಕೋಟಾ ಗ್ರಾಮ ಸಮೀಪದಲ್ಲಿ ಶಿಥಿಲಾವಸ್ಥೆಯಲ್ಲಿರುವ ಸೇತುವೆಯನ್ನು ಪುನಶ್ಚೇತನಗೊಳಿಸಲು ರೂ. 638.00 ಲಕ್ಷ (ರೂಪಾಯಿಗಳು ಆರು ನೂರ ಮೂವತ್ತೆಂಟು ಲಕ್ಷ ಮಾತ್ರ) ಗಳಿಗೆ ಸದರಿ ಕಾಮಗಾರಿಯನ್ನು 2012–13ನೇ ಸಾಲಿನ ಆಯವ್ಯಯ ಅಪೆಂಡಿಕ್ಸ್–ಇ ಅಡಿ ಲೆಕ್ಕ ಶೀರ್ಷಿಕೆ "5054–ಯೋಜನೆ–ಸೇತುವೆಗಳು" ಅಡಿ ಸೇರ್ಪಡಿಸುವ ಷರತ್ತಿಗೊಳಪಟ್ಟು ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999ರ ಕಲಂ 4(g) ಅಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಆರ್ಥಿಕ ಇಲಾಖೆಯು ದಿನಾಂಕ: 09–11–2012ರ ಅಧಿಸೂಚನೆಯಲ್ಲಿ ವಿನಾಯಿತಿ ನೀಡಿ ಆದೇಶಿಸಿರುವಂತೆ ಕಾಮಗಾರಿಯನ್ನು M/s Repcon Consultancy & Services, ಹೈದರಾಬಾದ್, ಇವರಿಗೆ ವಹಿಸಿ ಶೀಘ್ರವಾಗಿ ಕೈಗೊಳ್ಳಲು ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೃಷ್ಣಮೂರ್ತಿ ಬಿ. ಕುಲಕರ್ಣಿ**
ಸರ್ಕಾರದ ಉಪ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರುಗಳು ಮತ್ತು
ಒಳನಾಡು ಜಲಸಾರಿಗೆ ಇಲಾಖೆ (ಸಂಪರ್ಕ ಮತ್ತು ಕಟ್ಟಡಗಳು).

**P.R. 546**

**ಲೋಕೋಪಯೋಗಿ, ಬಂದರುಗಳು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ**

**ವಿಷಯ** : ಶಿವಮೊಗ್ಗ ನಗರ ಪರಿಮಿತಿಯಲ್ಲಿ ಹಾದು ಹೋಗುವ ಸೋಲಾಪುರ–ಮಂಗಳೂರು ರಾಷ್ಟ್ರೀಯ ಹೆದ್ದಾರಿ–13ರ ಸರಪಳಿ 525.425 ಕಿ.ಮೀ. ನಿಂದ 527.100 ಕಿ.ಮೀ. ವರೆಗೆ ವಿಭಜಕ ಹೊಂದಿರುವ ನಾಲ್ಕು ಪಥದ ಕ್ಯಾರೇಜ್‌ವೇ ನಿರ್ಮಾಣ ಕಾಮಗಾರಿ ಕುರಿತು.

**ಓದಲಾಗಿದೆ :** 1. ಸನ್ಮಾನ್ಯ ಉಪ ಮುಖ್ಯಮಂತ್ರಿಯವರ ಟಿಪ್ಪಣಿ ಸಂಖ್ಯೆ: ಉಮುಮ. 121/12, ದಿನಾಂಕ : 25–7–2012.

2. ಮುಖ್ಯ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿಗಳ ವಲಯ, ಬೆಂಗಳೂರು, ರವರ ಪತ್ರ ಸಂಖ್ಯೆ: 6867–69, ದಿನಾಂಕ : 06–09–2012.

3. ಸನ್ಮಾನ್ಯ ಉಪ ಮುಖ್ಯಮಂತ್ರಿಯವರ ಟಿಪ್ಪಣಿ ಸಂಖ್ಯೆ : ಉಮುಮ.ಟಿ 72/12, ದಿನಾಂಕ : 26–10–2012.

**ಪೀಠಿಕೆ :**

ರಾಷ್ಟ್ರೀಯ ಹೆದ್ದಾರಿ ಸಂಖ್ಯೆ : 13 ಒಂದು ಪ್ರಮುಖ ಮುಖ್ಯವಾದ ಹೆದ್ದಾರಿಯಾಗಿದ್ದು, ಮಹಾರಾಷ್ಟ್ರದಲ್ಲಿ ಸೋಲಾಪುರದಿಂದ ಕರ್ನಾಟಕದಲ್ಲಿನ ಮಂಗಳೂರು ವರೆಗೆ ಬಿಜಾಪುರ, ಹೊಸಪೇಟೆ, ಚಿತ್ರದುರ್ಗ, ಶಿವಮೊಗ್ಗ, ತೀರ್ಥಹಳ್ಳಿ ಮತ್ತು ಶೃಂಗೇರಿಯ ನಗರಗಳ ಮುಖಾಂತರ ಸಂಪರ್ಕಿಸುವ ಒಟ್ಟಾರೆ 745 ಕಿ.ಮೀ. ಉದ್ದದ ರಾಷ್ಟ್ರೀಯ ಹೆದ್ದಾರಿಯಾಗಿರುತ್ತದೆ. ಈ ಹೆದ್ದಾರಿಯ ಅತೀ ಹೆಚ್ಚು ಮಳೆ ಬೀಳುವ ಮಲೆನಾಡು ಪ್ರದೇಶದ ಮುಖಾಂತರ ಹಾದು ಹೋಗುತ್ತದೆ. ಹೆದ್ದಾರಿಯು ವಿಶ್ವ ಪ್ರಸಿದ್ಧಿಯಾದ ಜೋಗ್ ಫಾಲ್ಸ್‌ಗೆ ಹಾಗೂ ಕೈಗಾರಿಕಾ ನಗರವೆಂದು ಹೆಸರಿಸಿರುವ ಮೈಸೂರು ಪೇಪರ್ ಮಿಲ್ಸ್, ವಿಶ್ವೇಶ್ವರಯ್ಯ ಕಬ್ಬಿಣ ಮತ್ತು ಸ್ಟೀಲ್ ಪ್ಲಾಂಟ್, ಸಕ್ಕರೆ ಕಾರ್ಖಾನೆ ಇರುವ ಭದ್ರಾವತಿಗೆ ಸಂಪರ್ಕ ಕಲ್ಪಿಸುತ್ತದೆ. ರಸ್ತೆಯು ಶಿವಮೊಗ್ಗದ ನಗರದಲ್ಲಿ ಜನನಿಬಿಡ ಪ್ರದೇಶದ ಮುಖಾಂತರ ವಿಶೇಷ ಮಿತವ್ಯಯದ ವಲಯವೆಂದು ಘೋಷಿತಗೊಂಡ ಪ್ರದೇಶದಲ್ಲಿ ಹಾದು ಮುಂದುವರೆದು ಪ್ರಸ್ತಾಪಗೊಂಡಿರುವ ಶಿವಮೊಗ್ಗ ವಿಮಾನ ನಿಲ್ದಾಣಕ್ಕೆ ಸಂಪರ್ಕ ಕಲ್ಪಿಸುತ್ತದೆ. ಶಿವಮೊಗ್ಗ ನಗರ ಪರಿಮಿತಿಯಲ್ಲಿ ಸರಪಳಿ 525.425 ಕಿ.ಮೀ. ನಿಂದ 527.100 ಕಿ.ಮೀ. ವರೆಗಿನ ಭಾಗದ ಹೆದ್ದಾರಿಯು ಹಾದು ಹೋಗುತ್ತದೆ. ಈ ಭಾಗದಲ್ಲಿನ ಹೆದ್ದಾರಿಯಲ್ಲಿ ನಗರದ ವಾಹನಗಳೊಂದಿಗೆ 22596 ಪಿ.ಸಿ.ಯು. ಗಳ ವಾಹನ ಸಾಂದ್ರತೆ ಇದ್ದು, ಈ ವಾಹನಗಳ ಸುಗಮ ಸಂಚಾರಕ್ಕೆ ಅನುವುಗೊಳಿಸುವಲ್ಲಿ ವಿಭಜಕ ಹೊಂದಿದ ನಾಲ್ಕು ಪಥದ ರಸ್ತೆ ನಿರ್ಮಾಣದ ಅಗತ್ಯತೆ ಇರುತ್ತದೆ.

ಸನ್ಮಾನ್ಯ ಮುಖ್ಯಮಂತ್ರಿಗಳು ಗೃಹ ಕಛೇರಿ ಕೃಷ್ಣಾದಲ್ಲಿ ದಿನಾಂಕ : 12–4–2012ರಂದು ನಡೆಸಿದ ಅವಲೋಕನದ ಸಂದರ್ಭದಲ್ಲಿ ಪ್ರಸ್ತಾವಿತ ನಾಲ್ಕು ಪಥದ ರಸ್ತೆ, ನಿರ್ಮಾಣ ಕಾಮಗಾರಿ ಕೈಗೊಳ್ಳಲು ಸೂಚಿಸಿರುತ್ತಾರೆ. ಅದರನುಸಾರ ರೂ. 2028.00 ಲಕ್ಷ ಮೊತ್ತಕ್ಕೆ ಅಂದಾಜು ಪಟ್ಟಿಯನ್ನು ತಯಾರಿಸಲಾಗಿದ್ದು, ಇದರಲ್ಲಿ 24 ಮೀ. ಅಗಲದ ರಸ್ತೆ, ಫಾರ್ಮೇಷನ್ ವಿಭಜಕದೊಂದಿಗೆ 4 ಪಥದ ಕ್ಯಾರೇಜ್‌ವೇ, ಎರಡೂ ಬದಿಗಳಲ್ಲಿ ಫುಟ್‌ಪಾಥ್‌ನೊಂದಿಗೆ ಸಿಮೆಂಟ್ ಕಾಂಕ್ರೀಟಿನ ಚರಂಡಿ ನಿರ್ಮಾಣ, ಅಡ್ಡ ಮೋರಿ ಅಗಲೀಕರಣ ಹಾಗೂ ನೀರು ಸರಬರಾಜಿನ ಕೊಳವೆ, ವಿದ್ಯುಚ್ಛಕ್ತಿ ಕಂಬಳ ಮತ್ತಿತರೆ ಕಟ್ಟಡಗಳ ಸ್ಥಳಾಂತರಿಸುವುದು ಮತ್ತು ಭೂಸ್ವಾಧೀನಕ್ಕಾಗಿ ಅವಶ್ಯವಿರುವ ಪ್ರಾವಧಾನಗಳನ್ನು ಹೊಂದಿರುತ್ತದೆ. ಸನ್ಮಾನ್ಯ ಉಪ ಮುಖ್ಯಮಂತ್ರಿಯವರು ದಿನಾಂಕ : 25–7–2012ರ ಟಿಪ್ಪಣಿಯಲ್ಲಿ ಪ್ರಸ್ತಾವಿತ ಕಾಮಗಾರಿಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡಲು ಹಾಗೂ ಅನುದಾನವನ್ನು ಒದಗಿಸಲು ಸೂಚಿಸಿರುತ್ತಾರೆ. ದಿನಾಂಕ : 31–10–2012 ರಂದು ಸನ್ಮಾನ್ಯ ಉಪ ಮುಖ್ಯಮಂತ್ರಿಗಳು ವಿಷಯದ ಬಗ್ಗೆ ದೀರ್ಘವಾಗಿ ಚರ್ಚಿಸಿರುತ್ತಾರೆ. ಈ ಬಗ್ಗೆ ಭಾರತ ಸರ್ಕಾರವು NHDP_IV ಯೋಜನೆಯಡಿ ಶಿವಮೊಗ್ಗ ನಗರಕ್ಕೆ ಬೈಪಾಸ್ ರಸ್ತೆ, ನಿರ್ಮಾಣವನ್ನು ಪರಿಗಣಿಸುತ್ತಿರುವುದರಿಂದ, ಪ್ರಸ್ತಾವಿತ ನಗರದಲ್ಲಿ ಹಾದು ಹೋಗುತ್ತಿರುವ ಹೆದ್ದಾರಿ ಅಭಿವೃದ್ಧಿಯನ್ನು ರಾಜ್ಯ ಸರ್ಕಾರದಿಂದ ಕೈಗೊಳ್ಳಬೇಕಾಗಿದೆ. ಮುಂದುವರೆದು, ಬೈಪಾಸ್ ರಸ್ತೆಯು ನಿರ್ಮಾಣಗೊಂಡ ನಂತರ ಹೆದ್ದಾರಿಯು ಕೆಳದರ್ಜೆಗೆ ಇಳಿಯುವುದರಿಂದ ರಾಜ್ಯ ಸರ್ಕಾರದ ನಿರ್ವಹಣಾ ಹೊಣೆಯಾಗುತ್ತದೆಂದು ಅಭಿವೃದ್ಧಿಗೆ ಅನುದಾನ ಒದಗಿಸುವ ಕುರಿತು ಕೋರಿರುತ್ತಾರೆ.

2012–13ನೇ ಸಾಲಿನ ಅನುದಾನವನ್ನು ಮುಂದುವರೆದ ಕಾಮಗಾರಿಗಳಿಗೆ ಈಗಾಗಲೇ ಹಂಚಿಕೆ ಮಾಡಲಾಗಿರುವುದರಿಂದ ಹಾಗೂ ಅಪೆಂಡಿಕ್ಸ್–ಇ ಸಿದ್ಧಪಡಿಸಿ ಅನುಮೋದನೆಗೆ ಸಲ್ಲಿಸಲಾಗಿರುವುದರಿಂದ ಹೊಸ ಕಾಮಗಾರಿಗೆ ಅನುದಾನ ಲಭ್ಯವಿರದ ಕಾರಣ, ಹೆಚ್ಚುವರಿ ಅನುದಾನವನ್ನು ಒದಗಿಸುವ ಬಗ್ಗೆ ಆರ್ಥಿಕ ಇಲಾಖೆಯ ಸಹಮತಿಯನ್ನು ಕೋರಲಾಗಿ, ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ : ಪಿಡಬ್ಲ್ಯೂಡಿ 674.ಎಫ್‌ಸಿ–1/12, ದಿನಾಂಕ : 5–11–2012ರಲ್ಲಿ ಕೆಳಕಂಡಂತೆ ಅಭಿಪ್ರಾಯ ನೀಡಿರುತ್ತದೆ.

1. Being a N.H. Road, attempt should have been made by the Administrative Department to get GOI funding. PWD file discloses that no such effort has been made.
2. It is learnt that GOI is formulating a PPP project for Sholapur-Mangalore NH for Chitradurga-Shimoga stretch. That being so, taking up this work needs to be evaluated in consultation with MOSRTH.
3. Already Rs. 500.00 crs additionality has been provided under 5054-SH Improvements. Further additionality will not be possible due to resource constraints and other demands like crop loan waiver etc.
4. Therefore, Administrative Department should first act as per (a) and (b) above and if inevitable, shold take action to provide funds for this work from out of the available grants.

ಹೀಗಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ ಕಾಮಗಾರಿಯ ಜರೂರತೆಯನ್ನು ಪರಿಗಣಿಸಿ, ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಗಳು 1977ರ ಮೊದಲನೇ ಷೆಡ್ಯೂಲ್‌ನ ಐಟಂ 15 ರನ್ವಯ ಹಾಗೂ ನಿಯಮಗಳ ನಿಯಮ 17 ರನ್ವಯ ದಿನಾಂಕ : 29–11–2012 ರಂದು ನಡೆದ ಸಚಿವ ಸಂಪುಟದ ಅನುಮೋದನೆ ಪಡೆದು, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಲೋಇ 172 ಸಿಎನ್‌ಹೆಚ್ 2012, ಬೆಂಗಳೂರು, ದಿನಾಂಕ : 18–12–2012.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಹಿನ್ನೆಲೆಯಲ್ಲಿ ಶಿವಮೊಗ್ಗ ನಗರ ಪರಿಮಿತಿಯಲ್ಲಿ ಹಾದು ಹೋಗುವ ಸೋಲಾಪುರ–ಮಂಗಳೂರು ರಾಷ್ಟ್ರೀಯ ಹೆದ್ದಾರಿ–13ರ ಸರಪಳಿ 525.425 ಕಿ.ಮೀ. ನಿಂದ 527.100 ಕಿ.ಮೀ. ವರೆಗೆ ವಿಭಜಕ ಹೊಂದಿರುವ ನಾಲ್ಕು ಪಥದ ಕ್ಯಾರೇಜ್‌ವೇ ನಿರ್ಮಾಣ ಕಾಮಗಾರಿಯನ್ನು ರೂ. 2028 ಲಕ್ಷಗಳ (ಎರಡು ಸಾವಿರದ ಇಪ್ಪತ್ತೆಂಟು ಲಕ್ಷ ರೂಪಾಯಿಗಳು ಮಾತ್ರ) ಅಂದಾಜು ಮೊತ್ತಕ್ಕೆ ಪ್ರಸ್ತುತ ಸಾಲಿಗೆ ರೂ. 8.00 ಕೋಟಿಗಳ ಅನುದಾನದೊಂದಿಗೆ 2012–13ನೇ ಸಾಲಿನ ಅಪೆಂಡಿಕ್ಸ್–ಇ ನಲ್ಲಿ ಸೇರಿಸುವ ಷರತ್ತಿಗೊಳಪಟ್ಟು ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಕಾಮಗಾರಿಯನ್ನು ಕರ್ನಾಟಕ ಸಾರ್ವಜನಿಕ ಪಾರದರ್ಶಕತೆ ಅಧಿನಿಯಮದನ್ವಯ ಕೈಗೆತ್ತಿಕೊಳ್ಳತಕ್ಕದ್ದು.

ಈ ಆದೇಶವು ಕರ್ನಾಟಕ ಸರ್ಕಾರದ (ಕಾರ್ಯ ಕಲಾಪಗಳ ನಿರ್ವಹಣೆ) ನಿಯಮಗಳು, 1977ರ 17ನೇ ನಿಯಮದ (2)ನೇ ಉಪನಿಯಮದ ಪರುಂತುಕದ ವ್ಯಾಪ್ತಿಯೊಳಗೆ ಬರುತ್ತದೆ ಮತ್ತು ಅದರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೃಷ್ಣಮೂರ್ತಿ ಬಿ. ಕುಲಕರ್ಣಿ**
ಸರ್ಕಾರದ ಉಪ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರುಗಳು ಹಾಗೂ
ಒಳನಾಡು ಜಲಸಾರಿಗೆ ಇಲಾಖೆ (ಸಂಪರ್ಕ ಮತ್ತು ಕಟ್ಟಡಗಳು).

**P.R. 547**

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ :** ಮೆಟ್ರೋ ಕಾಮಗಾರಿಯ ಸಲುವಾಗಿ ವಿಧಾನಸೌಧ ಮುಂಭಾಗದಲ್ಲಿರುವ ಡಾ॥ ಬಿ.ಆರ್. ಅಂಬೇಡ್ಕರ್ ಪ್ರತಿಮೆಯನ್ನು ಸ್ಥಳಾಂತರಿಸಲು ತಾಂತ್ರಿಕ ಪರಿಣಿತವುಳ್ಳ ಸಂಸ್ಥೆಯನ್ನು ಆಯ್ಕೆ ಮಾಡಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕ ಅಧಿನಿಯಮ 1999ರ ನಿಯಮ 4(ಬಿ) ಅನ್ವಯ ವಿನಾಯಿತಿ ನೀಡುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರ ಪತ್ರ ಸಂ: ಮುಅ:ಸಂಕದ: ಕನಿಶಾ:ಸಇ-1:2012-13, ದಿನಾಂಕ : 16-2-2013.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ, ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರು ಮೆಟ್ರೋ ಕಾಮಗಾರಿಯ ಸಲುವಾಗಿ ವಿಧಾನಸೌಧ ಮುಂಭಾಗದಲ್ಲಿರುವ ಡಾ॥ ಬಿ.ಆರ್. ಅಂಬೇಡ್ಕರ್ ಪ್ರತಿಮೆಯನ್ನು ಸ್ಥಳಾಂತರಿಸಲು ತಾಂತ್ರಿಕ ಪರಿಣಿತವುಳ್ಳ ಸಂಸ್ಥೆಯನ್ನು ಆಯ್ಕೆ ಮಾಡಲು ಸರ್ಕಾರಿ ಆದೇಶ ಸಂ : ಲೋಇ 4 ಬಿಎಂಎಸ್ 2013(ಭಾ), ದಿನಾಂಕ : 29-1-2013ರಲ್ಲಿ ತಾಂತ್ರಿಕ ಪರಿಣಿತರ ಸಂಸ್ಥೆಯನ್ನು ರಚಿಸಲಾಗಿತ್ತು. ಸದರಿ ಸಮಿತಿಯು ಈ ಬಗ್ಗೆ ವಿವರವಾಗಿ ವರದಿ ನೀಡಿದ್ದು, ಸದರಿ ವರದಿಯಲ್ಲಿ ಡಾ॥ ಬಿ.ಆರ್. ಅಂಬೇಡ್ಕರ್ ಪ್ರತಿಮೆಯನ್ನು ಹಾಲಿ ಇರುವ ಸ್ಥಳದಿಂದ ಸ್ಥಳಾಂತರಿಸದೇ ಪೆಡೆಸ್ಟಲ್‌ನಿಂದ ಬೇರ್ಪಡಿಸಿ ಪೆಡೆಸ್ಟಲ್ ಮೇಲೆ ಕನಿಷ್ಠ ಅಂತರದಲ್ಲಿ ಪ್ರತಿಮೆಯನ್ನು ಸುರಕ್ಷಿತ ಕಬ್ಬಿಣದ ತೂಗು ಪಂಜರದಲ್ಲಿರಿಸುವ ಕಾಮಗಾರಿಯನ್ನು M/s. Stresscrete ಬೆಂಗಳೂರು ಸಂಸ್ಥೆಯವರಾದ ಶ್ರೀ ಡಿ.ಬೈರಪ್ಪ ಇವರಿಗೆ ನೇರವಾಗಿ ವಹಿಸಲು ಶಿಫಾರಸ್ಸು ಮಾಡಿರುತ್ತದೆ.

ಆದ್ದರಿಂದ ಡಾ॥ ಬಿ.ಆರ್. ಅಂಬೇಡ್ಕರ್ ಪ್ರತಿಮೆಯನ್ನು ಹಾಲಿ ಇರುವ ಸ್ಥಳದಿಂದ ಸ್ಥಳಾಂತರಿಸದೇ ಪೆಡೆಸ್ಟಲ್‌ನಿಂದ ಬೇರ್ಪಡಿಸಿ ಕನಿಷ್ಠ ಅಂತರದಲ್ಲಿ ಪ್ರತಿಮೆಯನ್ನು ಸುರಕ್ಷಿತ ಕಬ್ಬಿಣದ ತೂಗು ಪಂಜರದಲ್ಲಿರಿಸುವ ಕಾರ್ಯಕ್ಕೆ ಒಟ್ಟು ವೆಚ್ಚ ರೂ. 15.00 ಲಕ್ಷಗಳಾಗುವುದು. ಈ ಕಾರ್ಯವನ್ನು M/s. Stresscrete ಸಂಸ್ಥೆಗೆ ವಹಿಸಿ singal source ಎಂದು ಪರಿಗಣಿಸಿ ನೇರವಾಗಿ ವಹಿಸಲು ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕ ಅಧಿನಿಯಮ 1999ರ ನಿಯಮ 4(ಬಿ) ಅನ್ವಯ ವಿನಾಯಿತಿ ನೀಡಲು ಕೋರಿರುತ್ತಾರೆ. ಅದರಂತೆ ವಿನಾಯಿತಿ ನೀಡಬೇಕಾಗಿರುವುದರಿಂದ ಈ ಆದೇಶ.

### ಸರ್ಕಾರದ ಆದೇಶ ಸಂಖ್ಯೆ : ಲೋಇ 94 ಬಿಎಂಎಸ್ 2013 (ಭಾ), ಬೆಂಗಳೂರು, ದಿನಾಂಕ : 20-2-2013.

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ವಿಧಾನಸೌಧದ ಮುಂಭಾಗದಲ್ಲಿರುವ ಡಾ॥ ಬಿ.ಆರ್. ಅಂಬೇಡ್ಕರ್ ಪ್ರತಿಮೆಯನ್ನು ಮೆಟ್ರೋ ಕಾಮಗಾರಿಯ ಸಲುವಾಗಿ ಹಾಲಿ ಇರುವ ಸ್ಥಳದಿಂದ ಸ್ಥಳಾಂತರಿಸದೇ ಪೆಡೆಸ್ಟಲ್‌ನಿಂದ ಬೇರ್ಪಡಿಸಿ ಕನಿಷ್ಠ ಅಂತರದಲ್ಲಿ ಪ್ರತಿಮೆಯನ್ನು ಸುರಕ್ಷಿತ ಕಬ್ಬಿಣದ ತೂಗು ಪಂಜರದಲ್ಲಿರಿಸುವ ಕಾರ್ಯವನ್ನು ಒಟ್ಟು ವೆಚ್ಚ ರೂ. 15.00 ಲಕ್ಷಗಳಲ್ಲಿ M/s. Stresscrete ಸಂಸ್ಥೆಗೆ singal source ಎಂದು ಪರಿಗಣಿಸಿ ನೇರವಾಗಿ ವಹಿಸಲು ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕ ಅಧಿನಿಯಮ 1999ರ ನಿಯಮ 4(ಬಿ) ಅನ್ವಯ ವಿನಾಯಿತಿ ನೀಡಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಎಂ. ವೀರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು
ಒಳನಾಡು ಜಲಸಾರಿಗೆ ಇಲಾಖೆ (ಕಟ್ಟಡಗಳು).

**P.R. 548**

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ದಾವಣಗೆರೆ ಜಿಲ್ಲೆ, ಹರಪನಹಳ್ಳಿ ತಾಲ್ಲೂಕಿನ ಹಗರಿ ಗಜಾಪುರ ಹತ್ತಿರ ಹಳ್ಳಕ್ಕೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಅಂದಾಜಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** ದಿನಾಂಕ: 5-2-2013ರ ಬೆಂಗಳೂರು, ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಇಂಜಿನಿಯರ್‌ರವರ ಪತ್ರ ಸಂಖ್ಯೆ: ಮುಸದ/ತಾಂ.4/ಸ.ಇಂ.10/ದಾವಣಗೆರೆ/ಹೆಚ್ಚುವರಿ ಅನುದಾನ/2012-13/617.

**ಪ್ರಸ್ತಾವನೆ :**

2012-13ನೇ ಸಾಲಿಗೆ ಮುಂದುವರೆಸಿರುವ 2010-11ನೇ ಸಾಲಿನ ಸಣ್ಣ ನೀರಾವರಿ ವೃತ್ತ ಬೆಂಗಳೂರು ದರಪಟ್ಟಿಯ ದರಗಳನ್ನು ಅಳವಡಿಸಿ ತಯಾರಿಸಿರುವ ಮೇಲ್ಕಂಡ ಕಾಮಗಾರಿಯ ರೂ. 495.00 ಲಕ್ಷ ಮೊತ್ತದ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡುವಂತೆ ಕೋರಿ ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಈ ಯೋಜನೆಯಲ್ಲಿ 103.74 ಮೀಟರ್ ಉದ್ದದ 44 ಕಿಂಡಿಗಳುಳ್ಳ (21 ಮುಖ್ಯ ನಡುಗಂಬ ಮತ್ತು 22 ನೆಪಮಾತ್ರ ನಡುಗಂಬ ಹೊಂದಿರುವ) 2.50 ಮೀಟರ್ ಎತ್ತರದ ಬ್ಯಾರೇಜನ್ನು (ನೀರು ಶೇಕರಣೆ ಎತ್ತರ) ನಿರ್ಮಿಸಲು ಅಂದಾಜಿನಲ್ಲಿ ಅವಕಾಶ ಕಲ್ಪಿಸಿದೆ. ಈ ಯೋಜನೆಯಿಂದ 150 ಹೆಕ್ಟೇರ್ ಪ್ರದೇಶದಲ್ಲಿ ಅರೆ ನೀರಾವರಿ ಬೆಳೆಗಳಿಗೆ ನೀರಾವರಿ ಸೌಲಭ್ಯ ಕಲ್ಪಿಸಲು ಉದ್ದೇಶಿಸಿದೆ. ಬ್ಯಾರೇಜಿನ ಮೇಲ್ಭಾಗದಲ್ಲಿ 7.50 ಮೀ ಅಗಲದ ಸೇತುವೆಯನ್ನು

ನಿರ್ಮಿಸಲು ಅವಕಾಶ ಮಾಡಲಾಗಿದೆ. ಈ ಸೇತುವೆಯ ಮೂಲಕ ಗೌರಿಪುರದಿಂದ ಗಜಾಪುರಕ್ಕೆ ಸಂಪರ್ಕವನ್ನು ಕಲ್ಪಿಸಬಹುದಾಗಿದ್ದು ಎರಡು ಸ್ಥಳಗಳ ನಡುವೆ 15 ಕಿ.ಮೀ. ದೂರ ಕಡಿಮೆಯಾಗಲಿದೆ. ಲಾಭ ವೆಚ್ಚದ ಅನುಪಾತ ಶೇಕಡ 10 ರ ಬಡ್ಡಿ ದರದಲ್ಲಿ 1.19 ಆಗಿದ್ದು, ಕಾಮಗಾರಿಯು ಆರ್ಥಿಕವಾಗಿ ಹಾಗೂ ತಾಂತ್ರಿಕವಾಗಿ ಶಕ್ಯವಾಗಿದೆ.

ಈ ಕಾಮಗಾರಿಯ ವಿವರವಾದ ಅಂದಾಜು ಪಟ್ಟಿಯನ್ನು ದಿನಾಂಕ : 9-10-2012ರಂದು ನಡೆದ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯ ಸಭೆಯಲ್ಲಿ ಮಂಡಿಸಿದ್ದು, ಸಮಿತಿಯು ಕೆಲವು ಷರಾಗಳೊಂದಿಗೆ ಅಂದಾಜುಪಟ್ಟಿಗೆ ತೀರುವಳಿ ನೀಡಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು 2012-13ನೇ ಸಾಲಿನ ಅನುಬಂಧ-ಇ ನಲ್ಲಿ ಲೆಕ್ಕ ಶೀರ್ಷಿಕೆ-4702-00-101-05-01-139 ಪ್ರಧಾನ ಕಾಮಗಾರಿಗಳು-ಅಣೆಕಟ್ಟು/ಪಿಕಪ್/ಬಂದಾರ ಅಡಿ ಅವಕಾಶ ಮಾಡಿದೆ. ಮುಖ್ಯ ಇಂಜಿನಿಯರ್ ಪ್ರಸ್ತಾವನೆಯನ್ನು ಪರಿಗಣಿಸಿ ಅಂದಾಜಿಗೆ ಆಡಳಿತಾತ್ಮಕ ಅನುಮೋದನೆ ನೀಡಲು ಪರಿಗಣಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 137 ಅಪಿಬಂ (ತಾಂತ್ರಿಕ) 2012, ಬೆಂಗಳೂರು, ದಿನಾಂಕ : 20ನೇ ಫೆಬ್ರವರಿ, 2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಾವಣಗೆರೆ ಜಿಲ್ಲೆ, ಹರಪನಹಳ್ಳಿ ತಾಲ್ಲೂಕಿನ ಹಗರಿ ಗಜಾಪುರ ಹತ್ತಿರ ಹಳ್ಳಕ್ಕೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ರೂ. 495.00 ಲಕ್ಷಗಳು (ರೂ. ನಾಲ್ಕು ಕೋಟಿ ತೊಂಬತ್ತ ಐದು ಲಕ್ಷ) ಅಂದಾಜು ಪಟ್ಟಿಗೆ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಿದೆ.

1. ಕಾಮಗಾರಿಯ ವೆಚ್ಚವು ಯಾವುದೇ ಕಾರಣಕ್ಕೂ ಅನುಮೋದಿಸಿದ ಟೆಂಡರ್ ಮೊತ್ತಕ್ಕಿಂತ ಹೆಚ್ಚಾಗಬಾರದು ಹಾಗೂ ಕಾಮಗಾರಿಯನ್ನು ಕಾಲಮಿತಿಯೊಳಗೆ ಪೂರ್ಣಗೊಳಿಸತಕ್ಕದ್ದು.
2. ಒಂದು ವೇಳೆ ಸ್ಥಳ ಪರಿಸ್ಥಿತಿಗೆ ಅನುಗುಣವಾಗಿ ಹೆಚ್ಚಳ ನಿರೀಕ್ಷಿಸಿದಲ್ಲಿ ತಕ್ಷಣವೇ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಮಗಾರಿಯನ್ನು ಪೂರ್ಣಗೊಳಿಸತಕ್ಕದ್ದು.
3. ಕಾಮಗಾರಿ ಪ್ರಾರಂಭಿಸುವ ಮುನ್ನ ವಿನ್ಯಾಸ ಬದಲಾವಣೆಯಿಂದಾಗಿ ಅಥವಾ ಬೇರೆ ಕಾರಣದಿಂದ ಅನುಮೋದಿಸಿದ ಅಂದಾಜು ಮೊತ್ತ ಹೆಚ್ಚಾಗುವ ಸಂಭವ ಇದ್ದಲ್ಲಿ, ತಕ್ಷಣ ಪರಿಷ್ಕೃತ ಅಂದಾಜಿಗೆ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ನಂತರ ಕಾಮಗಾರಿಯನ್ನು ಪ್ರಾರಂಭಿಸುವುದು.
4. ಕಾಮಗಾರಿಯ ಅಂದಾಜು ಪಟ್ಟಿಗಳನ್ನು ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿ/ತಾಂತ್ರಿಕ ಸಮಿತಿಯು ಸಭೆಯಲ್ಲಿ ಮಂಡಿಸಿ ತೀರುವಳಿಯನ್ನು ಪಡೆಯುವುದು.
5. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಅನುಸಾರ ಟೆಂಡರ್ ಕರೆದು ತೆಗೆದುಕೊಳ್ಳತಕ್ಕದ್ದು.
6. ಕಾಮಗಾರಿ ಪೂರ್ಣಗೊಂಡ ಕೂಡಲೇ ಪಿ.ಸಿ.ಆರ್. ವರದಿಯನ್ನು ಸಲ್ಲಿಸತಕ್ಕದ್ದು ಹಾಗೂ ಅವಶ್ಯಕತೆ ಇದ್ದಲ್ಲಿ ಪರಿಷ್ಕೃತ ಅಂದಾಜು ತಯಾರಿಸಿ ಟಿ.ಎ.ಸಿ. ಅನುಮೋದನೆ ಪಡೆದು ಸಂಬಂಧಿಸಿದ ಸಕ್ಷಮ ಅಧಿಕಾರಿಗಳಿಗೆ ಅನುಮೋದನೆಗಾಗಿ ಸಲ್ಲಿಸುವುದು.
7. ಕಾಮಗಾರಿಗೆ ಅಗತ್ಯವಿರುವ ಜಮೀನಿನ ಸ್ವಾಧೀನಕ್ಕಾಗಿ ನಿಯಮಾನುಸಾರ ತಕ್ಷಣ ಭೂಸ್ವಾಧೀನ ಪ್ರಕ್ರಿಯೆ ಪ್ರಾರಂಭಿಸಲು ಕ್ರಮ ಕೈಗೊಳ್ಳತಕ್ಕದ್ದು.
8. ಇ.ಐ.ಆರ್.ಎಲ್/ವರ್ಕ್‌ಸ್ಲಿಪ್‌ಗಳನ್ನು ಸಲ್ಲಿಸಬೇಕಾದಲ್ಲಿ ತಕ್ಷಣವೇ ಸಲ್ಲಿಸತಕ್ಕದ್ದು.
9. ತಾಂತ್ರಿಕ ಮಂಜೂರಾತಿಯನ್ನು ನೀಡುವ ಮೊದಲು ಅಂದಾಜನ್ನು ಮೊತ್ತೊಮ್ಮೆ ವಿವರವಾಗಿ ಪರಿಶೀಲಿಸುವುದು.
10. ಈ ಯೋಜನೆಗೆ ನೀರು ಬಳಕೆದಾರರ ಸಂಘವನ್ನು ಸೃಜಿಸಬೇಕು ಹಾಗೂ ನಿರ್ವಹಣೆಯನ್ನು ಸದರಿ ಸಂಘಕ್ಕೆ ವಹಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ : 16-5-2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಲಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

P.R. 347

## COMMERCE AND INDUSTRIES SECRETARIAT

**Subject :** Constituting Manufacturing Task Force – reg.

**Read :** Proposal from Commissioner for Industrial Development and Director of Industries and Commerce, Bangalore dated 26-09-2012.

**PREAMBLE :**

The Commissioner for Industrial Development and Director of Industries and Commerce, in his proposal read above has stated that, the Government of India has announced a National Manufacturing Policy with an objectives of enhancing the share of manufacturing in GDP from the current level of 16% to 25% and creating employment opportunity for 100 million people in the next ten years. In Karnataka, immense growth is noticed in the manufacturing sector in the last 3 years, though the serve sector is doing quite well. The growth rate in manufacturing sector as per EC survey in Karnataka is still below the national average.

In this connection, constitution of a separate Task Force which can advise Government of Karnataka on the vision of moving ahead in order to promote manufacturing sector. It is proposed that this Task Force may be headed by Principal Secretary, Commerce and Industries Department and the following people may be requested to participate as its members :-

| | | |
|---|---|---|
| 1 | Mr. Vishwanathan, Former Managing Director, BOSCH | Chairman |
| 2 | Mr. Vikram Kirloskar of Toyota | Vice- Chairman |
| 3 | Chairman & Managing Director of Ingersoll Rand | Member |
| 4 | Mr. L. Krishnan, present Karnataka CII Chairman | Member |
| 5 | President, FKCCI | Member |
| 6 | President, BCIC | Member |
| 7 | Mr. Philip Divri, Managing Director, Volvo | Member |
| 8 | Mr. F.R. Singvi, Managing Director, Sansera India Pvt. Ltd. | Member |
| 9 | Director, CMTI Tumkur Road | Member |
| 10 | Nirmala Shapoorkar, Unit head, Nestle India Ltd., Nanjangud, Mysore District | Member |
| 11 | Mr. Rajendra Hinduja, Gokaldas Exports | Member |
| 12 | Mr. Ajay Nanavati, Chairman, 3M Ltd. | Member |
| 13 | Mr. Narendra Pani. NIAS | Member |

Government has examined the proposal and hence the following Order.

**GOVERNMENT ORDER NO. CI 71 SPI 2013, BANGALORE, DATED 16.05.2013**

In the circumstances explained in the preamble, Government is pleased to constitute Manufacturing Task Force of Karnataka as follows :

| | | |
|---|---|---|
| 1 | Mr. Vishwanathan, Former Managing Director, BOSCH | Chairman |
| 2 | Mr. Vikram Kirloskar of Toyota | Vice- Chairman |
| 3 | Chairman & Managing Director of Ingersoll Rand | Member |
| 4 | Mr. L. Krishnan, present Karnataka CII Chairman | Member |
| 5 | President, FKCCI | Member |
| 6 | President, BCIC | Member |
| 7 | Mr. Philip Divri, Managing Director, Volvo | Member |
| 8 | Mr. F.R. Singvi, Managing Director, Sansera India Pvt. Ltd. | Member |
| 9 | Director, CMTI Tumkur Road | Member |
| 10 | Nirmala Shapoorkar, Unit head, Nestle India Ltd., Nanjangud, Mysore District | Member |
| 11 | Mr. Rajendra Hinduja, Gokaldas Exports | Member |
| 12 | Mr. Ajay Nanavati, Chairman, 3M Ltd. | Member |
| 13 | Mr. Narendra Pani. NIAS | Member |
| 14 | Mr. Mohandas Pai, Manipal Global | Member |
| 15 | Commissioner for Industrial Development and Director of Industries and Commerce | Member Secretary |

The role and responsibilities of the Task Force is as follows :

The Task Force shall discuss on various issues concerning the manufacturing sector in the State and suggest measures for improving the contribution of manufacturing sector upto 25% from the present level of 16% to the GDP.

By Order and in the name of the Governor of Karnataka,

**SHIVASHANKAR NAIK. L,**

Desk Officer (Technical Cell),

Commerce & Industries Department.

**P.R. 557**

## ವಸತಿ ಸಚಿವಾಲಯ

**ವಿಷಯ:** 2012-2013 ನೇ ಸಾಲಿನಲ್ಲಿ ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಗೆ ಕೊಳಚೆ ಸುಧಾರಣೆ ಹಾಗೂ ಹುಡ್ಕೋ ಸಾಲಗಳ ಮೇಲು ಉಸ್ತುವಾರಿಗೆ ನಾಲ್ಕನೇ ತ್ರೈಮಾಸಿಕ ಕಂತಿನ ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ವಇ 29 ಕೊಮಂಲೆ 2012, ದಿನಾಂಕ: 21-06-2012, 14-09-2012, 16-11-2012 ಮತ್ತು 12-02-2013.

2. ಸರ್ಕಾರದ ಆದೇಶ ಸಂಖ್ಯೆ : ವಇ 15 ಕೊಮಂಲೆ 2012, ದಿನಾಂಕ: 11-06-2012.

3. ಆಯುಕ್ತರು, ಕ ಕೊ ಅ ಮ, ಬೆಂಗಳೂರು ಇವರ ಪತ್ರ ಸಂಖ್ಯೆ: ಕಕೊಅಮ/ಲೆಪಶಾ/ ಅನುದಾನ/ 2012-13, ದಿನಾಂಕ: 28-01-2013

4. ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ/4/ಟಿಎಫ್‌ಪಿ/2012, ಬೆಂಗಳೂರು, ದಿನಾಂಕ: 27.04.2012.

5. ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ/8/ಟಿಎಫ್‌ಪಿ/2012, ಬೆಂಗಳೂರು, ದಿನಾಂಕ: 04.10.2012.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಸರ್ಕಾರದ ಆದೇಶಗಳಲ್ಲಿ 2012-13ನೇ ಸಾಲಿನ ಮೊದಲನೇ, ಎರಡನೇ, ಮೂರನೇ ಹಾಗೂ ನಾಲ್ಕನೇ ತ್ರೈಮಾಸಿಕ ಕಂತಿನ ಅನುದಾನ ಸಿಬ್ಬಂದಿ ವೆಚ್ಚಕ್ಕೆ (ಯೋಜನೆ ಮತ್ತು ಯೋಜನೇತರಡಿ) ರೂ. 1492.68 ಲಕ್ಷಗಳು, ಕೊಳಚೆ ಸುಧಾರಣೆ - ಸಹಾಯಧನ- ಯೋಜನೆಯಡಿ ರೂ. 3821.00 ಲಕ್ಷಗಳನ್ನು ಹಾಗೂ ಹುಡ್ಕೋ ಸಾಲಗಳ ಮೇಲು ಉಸ್ತುವಾರಿ - ಯೋಜನೇತರಡಿಯಲ್ಲಿ ರೂ. 946.87 ಲಕ್ಷಗಳು (ಹುಡ್ಕೋ ಸಂಸ್ಥೆಯ ಬೇಡಿಕೆಯನ್ವಯ) ಒಟ್ಟು ಯೋಜನೆಯಡಿ ರೂ. 4371.00 ಲಕ್ಷಗಳು ಹಾಗೂ ಯೋಜನೇತರಡಿಯಲ್ಲಿ ರೂ. 1889.55 ಲಕ್ಷಗಳು ಒಟ್ಟು ರೂ. 6260.55 ಲಕ್ಷಗಳನ್ನು ಬಿಡುಗಡೆ ಮಾಡಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿ ಬೆಂಗಳೂರು ಮತ್ತು ಮೈಸೂರು ನಗರಗಳಲ್ಲಿ JnNURM-BSUP ಯೋಜನೆಯಡಿ ಪ್ರಾರಂಭಿಸದೇ ಇರುವ 4742 ಮನೆಗಳಿಗೆ ಹೆಚ್ಚುವರಿ ಅನುದಾನಗಳ ಪೈಕಿ ವಸತಿ ಇಲಾಖೆಯ ಶೇಕಡ 50 ರಷ್ಟು ಅನುದಾನ ರೂ. 1804.00 ಲಕ್ಷಗಳನ್ನು ಕೊಳಚೆ ಸುಧಾರಣೆ - ಸಹಾಯಧನ- ಯೋಜನೆಯಡಿ ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಗೆ ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿ, ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ ರವರ ಪತ್ರದಲ್ಲಿ 2012-13 ನೇ ಸಾಲಿನ ನಾಲ್ಕನೇ ತ್ರೈಮಾಸಿಕ ಕಂತಿನ ಅನುದಾನ ಸಿಬ್ಬಂದಿ ವೆಚ್ಚಕ್ಕೆ (ಯೋಜನೆ ಮತ್ತು ಯೋಜನೇತರಡಿ) ರೂ. 373.17 ಲಕ್ಷಗಳು, ಕೊಳಚೆ ಸುಧಾರಣೆ - ಸಹಾಯಧನ- ಯೋಜನೆಯಡಿ ರೂ. 1875.00 ಲಕ್ಷಗಳನ್ನು ಹಾಗೂ ಹುಡ್ಕೋ ಸಾಲಗಳ ಮೇಲು ಉಸ್ತುವಾರಿ - ಯೋಜನೇತರಡಿಯಲ್ಲಿ ರೂ. 300.12 ಲಕ್ಷಗಳು (ಹುಡ್ಕೋ ಸಂಸ್ಥೆಯ ಬೇಡಿಕೆಯನ್ವಯ) ಒಟ್ಟು ಯೋಜನೆಯಡಿ ರೂ. 2012.50 ಲಕ್ಷಗಳು ಹಾಗೂ ಯೋಜನೇತರಡಿಯಲ್ಲಿ ರೂ. 535.79 ಲಕ್ಷಗಳು ಒಟ್ಟು ರೂ. 2548.29 ಲಕ್ಷಗಳನ್ನು ಮಂಡಳಿಗೆ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4) ಮತ್ತು (5) ರ ಆರ್ಥಿಕ ಇಲಾಖೆಯ ಆದೇಶಗಳಲ್ಲಿ ಸಿಬ್ಬಂದಿ ವೆಚ್ಚಗಳಿಗೆ ಆಯವ್ಯಯದಲ್ಲಿ ಒದಗಿಸಲಾದ ಮೊತ್ತದವರೆಗೆ ಆರ್ಥಿಕ ಇಲಾಖೆಯ ಅನುಮತಿ ಇದೆಯೆಂದು ಭಾವಿಸಿ ಹಣವನ್ನು ಬಿಡುಗಡೆ ಮಾಡಬಹುದಾಗಿದೆ. ಅದರಂತೆ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರ ಚಲಾಯಿಸಿ 2012-13 ನೇ ಸಾಲಿನ ನಾಲ್ಕನೇ ತ್ರೈಮಾಸಿಕ ಕಂತಿನ ಅನುದಾನ ಸಿಬ್ಬಂದಿ ವೆಚ್ಚಕ್ಕೆ (ಯೋಜನೆ ಮತ್ತು ಯೋಜನೇತರಡಿ) ರೂ. 373.17 ಲಕ್ಷಗಳನ್ನು ಕ್ರಮಸಂಖ್ಯೆ (1)ರ ದಿನಾಂಕ 12-02-2013 ರ ಆದೇಶದಲ್ಲಿ ಬಿಡುಗಡೆ ಮಾಡಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4) ಮತ್ತು (5) ರ ಆರ್ಥಿಕ ಇಲಾಖೆಯ ಆದೇಶಗಳಲ್ಲಿ ಆದೇಶಿಸಿರುವಂತೆ ನಾಲ್ಕನೇ ತ್ರೈಮಾಸಿಕ ಕಂತಿನ ಅನುದಾನ ಕೊಳಚೆ ಸುಧಾರಣೆ - ಸಹಾಯಧನ- ಯೋಜನೆಯಡಿ ರೂ. 1875.00 ಲಕ್ಷಗಳನ್ನು ಹಾಗೂ ಹುಡ್ಕೋ ಸಾಲಗಳ ಮೇಲು ಉಸ್ತುವಾರಿ - ಯೋಜನೇತರಡಿಯಲ್ಲಿ ರೂ. 300.12 ಲಕ್ಷಗಳು (ಹುಡ್ಕೋ ಸಂಸ್ಥೆಯ ಬೇಡಿಕೆಯನ್ವಯ) ಒಟ್ಟು ರೂ. 2175.12 ಲಕ್ಷಗಳನ್ನು ಬಿಡುಗಡೆ ಮಾಡಲು ಪ್ರಸ್ತಾವನೆಯನ್ನು ಆರ್ಥಿಕ ಇಲಾಖೆಗೆ ಸಲ್ಲಿಸಲಾಗಿದೆ.

ಸರ್ಕಾರವು, ಆಯುಕ್ತರು, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಯವರ ಪ್ರಸ್ತಾವನೆಯನ್ನು ಪರಿಶೀಲಿಸಿ ಹಾಗೂ ಆರ್ಥಿಕ ಇಲಾಖೆಯ ಆದೇಶದನ್ವಯ ನಾಲ್ಕನೇ ತ್ರೈಮಾಸಿಕ ಕಂತಿನ ಕೊಳಚೆ ಸುಧಾರಣೆ - ಸಹಾಯಧನ- ಯೋಜನೆಯಡಿ ಹಾಗೂ ಹುಡ್ಕೋ ಸಾಲಗಳ ಮೇಲು ಉಸ್ತುವಾರಿ - ಯೋಜನೇತರಡಿಯಲ್ಲಿ ಅನುದಾನವನ್ನು ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಗೆ ಬಿಡುಗಡೆ ಮಾಡಲು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ವಇ 29 ಕೊಮಂಲೆ 2012, ಬೆಂಗಳೂರು, ದಿನಾಂಕ : 12ನೇ ಮಾರ್ಚ್ 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಗೆ 2012-13ನೇ ಸಾಲಿನ ನಾಲ್ಕನೇ ತ್ರೈಮಾಸಿಕ ಕಂತಿನ ಅನುದಾನವನ್ನು ಕೊಳಚೆ ಸುಧಾರಣೆ - ಸಹಾಯಧನ- ಯೋಜನೆಯಡಿ ಹಾಗೂ ಹುಡ್ಕೋ ಸಾಲಗಳ ಮೇಲು ಉಸ್ತುವಾರಿ - ಯೋಜನೇತರಡಿಯಲ್ಲಿ ಈ ಕೆಳಕಂಡ ಲೆಕ್ಕಶೀರ್ಷಿಕೆಗಳಲ್ಲಿ ಒಟ್ಟು ರೂ. 2175.12 ಲಕ್ಷಗಳು (ಇಪ್ಪತ್ತೊಂದು ಕೋಟಿ ಎಪ್ಪತ್ತೈದು ಲಕ್ಷದ ಹನ್ನೆರಡು ಸಾವಿರ ರೂಪಾಯಿಗಳು ಮಾತ್ರ) ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಗೆ ಈ ಅನುದಾನವನ್ನು ಕೆಳಕಂಡ ನಿಬಂಧನೆಗಳನ್ನು ಕಟ್ಟು ನಿಟ್ಟಾಗಿ ಪಾಲಿಸುವ ಷರತ್ತಿನೊಂದಿಗೆ ಬಿಡುಗಡೆ ಮಾಡಿ ಆದೇಶಿಸಿದೆ.

(ರೂ. ಲಕ್ಷಗಳಲ್ಲಿ)

| ಕ್ರಮ ಸಂಖ್ಯೆ | ಲೆಕ್ಕ ಶೀರ್ಷಿಕೆ | ನಾಲ್ಕನೇ ತ್ರೈಮಾಸಿಕ | | |
|---|---|---|---|---|
| | | ಯೋಜನೆ | ಯೋಜನೇತರ | ಒಟ್ಟು |
| 1 | ಕೊಳಚೆ ಸುಧಾರಣೆ – ಸಹಾಯಧನ 2217–04–191–2–02–106 | 1875.00 | 0.00 | 1875.00 |
| 2 | ಹುಡ್ಕೋ ಸಾಲಗಳ ಮೇಲು ಉಸ್ತುವಾರಿ 2217–04–191–2–04–240 | 0.00 | 300.12 | 300.12 |
| | ಒಟ್ಟು | **1875.00** | **300.12** | **2175.12** |

**ನಿಬಂಧನೆಗಳು :**

1. ಸರ್ಕಾರದ ಉಪ ಕಾರ್ಯದರ್ಶಿ, ವಸತಿ ಇಲಾಖೆ, ಬೆಂಗಳೂರು ಇವರು ಹಣ ಬಿಡುಗಡೆ ಮಾಡುವ ಬಿಲ್ಲಿಗೆ ಮೇಲು ರುಜು ಮಾಡಲು ಅಧಿಕೃತವಾಗಿರುತ್ತಾರೆ.
2. ಈ ಆದೇಶದಲ್ಲಿ ಬಿಡುಗಡೆ ಮಾಡಲಾಗಿರುವ ಅನುದಾನದ ಬಗ್ಗೆ ಪ್ರತ್ಯೇಕ ಲೆಕ್ಕ ಇಡತಕ್ಕದ್ದು.
3. ಯಾವ ಉದ್ದೇಶಕ್ಕಾಗಿ ಹಣ ಬಿಡುಗಡೆ ಮಾಡಿದೆಯೋ ಅದೇ ಉದ್ದೇಶಕ್ಕಾಗಿ ಬಳಸತಕ್ಕದ್ದು.
4. ಪ್ರಸಕ್ತ ಸಾಲಿನಲ್ಲಿ ಬಿಡುಗಡೆ ಮಾಡಿದ ಹಣಕಾಸಿನ ಮೊತ್ತಕ್ಕೆ ಬಳಕೆ ಪ್ರಮಾಣ ಪತ್ರವನ್ನು ಮಹಾಲೇಖಪಾಲಕರು, ಕರ್ನಾಟಕ, ಬೆಂಗಳೂರು ಇವರಿಗೆ ಕಳುಹಿಸಿ ಅದರ ಪ್ರತಿಯನ್ನು ಸರ್ಕಾರಕ್ಕೆ ಕಳುಹಿಸುವುದು.
5. ಆರ್ಥಿಕ ಇಲಾಖೆ ಆದೇಶ ಸಂಖ್ಯೆ : ಎಫ್‌ಡಿ 4/ಟಿಎಫ್‌ಪಿ/12, ದಿನಾಂಕ 27–04–2012 ಹಾಗೂ ಎಫ್‌ಡಿ/8/ ಟಿಎಫ್‌ಸಿ/2012, ದಿನಾಂಕ 04–10–12 ಆದೇಶಗಳಲ್ಲಿ ತಿಳಿಸಿರುವಂತೆ ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ/89/ವೆಚ್ಚ–9/2013, ದಿನಾಂಕ 08–03–2013ರ ಸಹಮತಿಯೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ನಾಗಣ್ಣ,**

ಪೀಠಾಧಿಕಾರಿ–4,

ವಸತಿ ಇಲಾಖೆ.

P.R. 558

SC - 250